

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 10-03-2021 ಪ್ರಶ್ನೆ ಸಂಖ್ಯೆ : 741 (1055)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಅರವಿಂದಕುಮಾರ್‌ಅರಳಿ(ವಿಧಾನಸಭೆಯಿಂದಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 10-03-2021

ಉತ್ತರಿಸುವ ಸಚಿವರು: ಮಾನ್ಯ ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ವಿಷಯ : ಬೀದರ್ ಜಿಲ್ಲೆಯಲ್ಲಿ ಅಲೆಮಾರಿ ಮತ್ತು ಅರೆ ಅಲೆಮಾರಿ ಜನಾಂಗದವರಿಗೆ ನಿವೇಶನದ ಬಗ್ಗೆ

(ಅ) ಬೀದರ್ ಜಿಲ್ಲೆಯ ಔರಾದ ತಾಲ್ಲೂಕಿನ ಸರ್ವೆ ಸಂಖ್ಯೆ 183 ಹಾಗೂ ಬೀದರ್ ತಾಲ್ಲೂಕಿನ ಸರ್ವೆ ಸಂಖ್ಯೆ: 27-28ರಲ್ಲಿ ಅಲೆಮಾರಿ ಮತ್ತು ಅರೆ ಅಲೆಮಾರಿಗಳಿಗೆ ನಿವೇಶನ ಒದಗಿಸಲು ತಲಾ 2 ಎಕರೆ ಜಮೀನನ್ನು ಒದಗಿಸಲಾಗಿದ್ದು ಆ ಜಮೀನನ್ನು ಫಲಾನುಭವಿಗಳಿಗೆ ಹಂಚಲಾಗಿದೆಯೇ; ಹಂಚಿದ್ದಲ್ಲಿ, ತಾಲ್ಲೂಕುವಾರು ಫಲಾನುಭವಿಗಳ ವಿವರ ನೀಡುವುದು; ಹಂಚಿಕೆ ಯಾಗದಿದ್ದಲ್ಲಿ ಕಾರಣವೇನು;

(ಆ) ಜಿಲ್ಲೆಯಲ್ಲಿ 2017-18 ರಿಂದ 2019-2020ರಲ್ಲಿ 102 ಹಾಗೂ 515 ವಸತಿಗಳನ್ನು ಮಂಜೂರು ಮಾಡಲಾಗಿದ್ದು, ಅವುಗಳನ್ನು ಹಂಚಿಕೆ ಮಾಡಲಾಗಿದೆಯೇ; ಮಾಡಿದ್ದಲ್ಲಿ, ಫಲಾನುಭವಿಗಳ ವಿವರ ನೀಡುವುದು ಹಾಗೂ ಹಂಚಿಕೆ ಮಾಡಲಾದÀ ನಿಯಮಗಳೇನು ;

(ಇ) 2017-18ನೇ ಸಾಲಿನಲ್ಲಿ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ಯೋಜನೆಯಡಿಯಲ್ಲಿ ಸಮುದಾಯದ ಕಾಲೋನಿಯಲ್ಲಿ ಮೂಲಭೂತ ಸೌಕರ್ಯ ಕಾಮಗಾರಿಗಳು ಆಗಿರುವುದು ಎಷ್ಟು; ಹಾಗೂ ಅದಕ್ಕೆ ಮೀಸಲಿಟ್ಟ ಅನುದಾನ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಈ) ರಾಜ್ಯದಲ್ಲಿ ಅಲೆಮಾರಿ ಮತ್ತು ಅರೆ ಅಲೆಮಾರಿ ಜನಾಂಗದವರಿಗೆ 2018ರಿಂದ 2020-21ನೇ ಸಾಲಿನಲ್ಲಿ ಮೀಸಲಿಟ್ಟ ಅನುದಾನ ಎಷ್ಟು; ಅದರಲ್ಲಿ ಮೂಲಭೂತ ಸೌಕರ್ಯಕ್ಕೆ ವಸತಿಗಾಗಿ (ಮನೆಗಳಿಗಾಗಿ) ಸ್ವಯಂ ಉದ್ಯೋಗಕ್ಕಾಗಿ, ಸಾಲ ಸೌಲಭ್ಯಕ್ಕಾಗಿ ಹಾಗೂ ಸಮಾಜದ ಉನ್ನತ ಅಭಿವೃದ್ಧಿಗಾಗಿ ಯಾವ ಯಾವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ ?